# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 6ನೇ ಸಂಚಿಕೆ ಕೊಪ್ಪ 27-9-1987 ಭಾನುವಾರ ಬೆಲೆ 50 ಪೈಸೆ


## ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಮಾಮ್ಕೋಸ್ ಪ್ರೋ॥ ಧನ

ಶಿವಮೊಗ್ಗ : ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘವು ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಯಲ್ಲಿ ವಾಸಿಸುವ ಸಂಘದ ಸದಸ್ಯರ ಮಕ್ಕಳಲ್ಲಿ ಹೆಚ್ಚು ಅಂಕಗಳನ್ನು ಗಳಿಸಿ, ಎಸ್.ಎಸ್.ಎಲ್.ಸಿ. ಮತ್ತು ಅಂತಿಮ ಪಿ. ಯು. ಸಿ. ಯಲ್ಲಿ ಉತ್ತೀರ್ಣರಾದವರಿಗೆ ಪ್ರತಿ ವರ್ಷದಂತೆ ಈ ವರ್ಷವೂ ಸಹ ಬೆಳ್ಳಿ ಹಬ್ಬದ ಸ್ಮರಣಾರ್ಥ ಪ್ರೋತ್ಸಾಹ ಧನ ಕೊಟ್ಟು ಪುರಸ್ಕರಿಸಲಿದೆ.

ಅರ್ಹ ವಿದ್ಯಾರ್ಥಿಗಳು ದಿನಾಂಕ 15–10–87ರ ಒಳಗಾಗಿ ಪಾಸಾದ ಪರೀಕ್ಷೆ ಸರ್ಟಿಫೈಡ್ ಮಾರ್ಕ್ಸ್‌ಕಾರ್ಡ್, ತಮ್ಮ ಹೆಸರು, ತಮ್ಮ ತಂದೆಯ ಹೆಸರು, ಅವರು ಸಂಘದಲ್ಲಿ ಇದ್ದ ಸದಸ್ಯತ್ವದ ನಂಬರುಗಳ ಮಾಹಿತಿಯನ್ನು ಅರ್ಜಿಯಲ್ಲಿ ಕಾಣಿಸಿ, ಸಂಘದ ಕಾರ್ಯದರ್ಶಿಯವರಿಗೆ ಅರ್ಜಿ ಕಳಿಸಬೇಕು.

## "ನೆಮ್ಮಾರು 'ಡ್ವಾಕ್ರಾ' ಘಟಕದಲ್ಲಿ ಅವ್ಯವಹಾರ ನಡೆದಿದೆ"

# ಜಿಲ್ಲಾ ಪರಿಷತ್ ಸಭೆಯಲ್ಲಿ ಮುಖ್ಯ ಕಾರ್ಯದರ್ಶಿ ಒಪ್ಪಿಗೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಚಿಕ್ಕಮಗಳೂರು : 'ನೆಮ್ಮಾರು ಡ್ವಾಕ್ರಾ ಘಟಕದ ಲೆಕ್ಕಪತ್ರ ತನಿಖಾ ವರದಿ ಬಂದಿದೆ; ಅವ್ಯವಹಾರ ನಡೆದಿರುವುದಾಗಿ ಗ್ರಾಮೀಣ ಬ್ಯಾಂಕ್ ಅಧ್ಯಕ್ಷ ಅಚ್ಯುತ ಪೈಯವರಿಗೂ ಕಂಡು ಬಂದಿದೆಯಂತೆ. 3 ದಿನದೊಳಗೆ ಸಂಬಂಧಿಸಿದ ಶಾಖಾ ಮ್ಯಾನೇಜರನ್ನು ಅಮಾನತುಪಡಿಸಿ ಮುಂದಿನ ಕ್ರಮ ಕೈಗೊಳ್ಳುವುದಾಗಿ ಹೇಳಿದ್ದಾರೆ' ಎಂದು ಜಿಲ್ಲಾ ಪರಿಷತ್ ಮುಖ್ಯ ಕಾರ್ಯದರ್ಶಿ ಸೆ. 25ರ ಜಿ.ಪ. ಸಭೆಗೆ ಸಮಜಾಯಿಷಿ ನೀಡಿದ ಮೇರೆಗೆ, "ಸೋಮವಾರದೊಳಗೆ ತಪ್ಪಿತಸ್ಥರ ಮೇಲೆ ಕ್ರಮ ಕೈಗೊಳ್ಳುತ್ತೇವೆ" ಎಂದು ಅಧ್ಯಕ್ಷರು ಸಭೆಗೆ ಭರವಸೆ ಕೊಟ್ಟರು.

**ಈ ಕುರಿತು ನಡೆದ ಸುದೀರ್ಘ ಚರ್ಚೆಯ ನಂತರ, ಈ ಬಗ್ಗೆ ಮುಖ್ಯ ಕಾರ್ಯದರ್ಶಿ ವಿವರಣೆ ನೀಡುವಂತೆ ಅಧ್ಯಕ್ಷರು ಸೂಚಿಸಿದ್ದರು. ಅವರ ವಿವರಣೆಯ ನಂತರ ಅಧ್ಯಕ್ಷರ ನಿರ್ಣಯಕ್ಕಾಗಿ ಕಚ್ಚೋಡಿ ಶ್ರೀನಿವಾಸ್, ಕೆ.ವಿ. ರಾಮಪ್ಪಯ್ಯ ಮುಂತಾದವರು ಪಟ್ಟು ಹಿಡಿದಾಗ ಅಧ್ಯಕ್ಷರು, ತಾನು ಆಡಿಟ್ ವರದಿ ನೋಡಿ, ತಕ್ಷಣ ಮುಂದಿನ ಕ್ರಮಕ್ಕೆ ಆದೇಶಿಸುವುದಾಗಿ ಹೇಳಿ ಮೇಲಿನಂತೆ ಭರವಸೆ ಕೊಟ್ಟರು.**

### ಸುದೀರ್ಘ ಚರ್ಚೆ

ಇದಕ್ಕೆ ಮೊದಲು, ಹೆಚ್ಚುವರಿ ಅಜೆಂಡಾ ಮೂಲಕ ಸಭೆಯಲ್ಲಿ ವಿಷಯವನ್ನು ಪ್ರಸ್ತಾಪಿಸಿದ ಗೋವಿಂದ ಗೌಡರು, ಘಟಕ ಸ್ಥಾಪನೆಯಾದ ಹಿನ್ನಲೆ, ಚೆನ್ನಾಗಿ ಬೆಳವಣಿಗೆ ಹೊಂದುತ್ತಿದ್ದ ಘಟಕದಲ್ಲಿ ಅವ್ಯವಹಾರದ ಶಂಕೆ ಬಂದು ತಪಾಸಣೆ ನಡೆಸಿದಾಗ ಮೇಲ್ನೋಟಕ್ಕೇ ಅವ್ಯವಹಾರದ ಸುಳಿವು ದೊರೆತು ಕೂಲಂಕಷ ತನಿಖೆ ಮಾಡುವಂತೆ 20 ಅಂಶದ ಸಭೆಯಲ್ಲಿ ನಿರ್ಣಯಿಸಿದ್ದು ಮುಂತಾದುವನ್ನು ವಿವರವಾಗಿ ತಿಳಿಸಿ, ಈ ಬಗ್ಗೆ ಕೂಡಲೇ ಕ್ರಮ ಅಗತ್ಯ ಎಂದರು.

ಫಲಾನುಭವಿಗಳಿಗೆ ನಿಗದಿ ಮಾಡಿದ 6 ಸಾವಿರ ರೂ.ಗಿಂತ 2000 ರೂ. ಸಾಲ ಹೆಚ್ಚು ಮಂಜೂರು ಮಾಡಿ ಮೋಸದಿಂದ ಸಹಿ ಪಡೆದಿರುವುದು, 3000 ರೂ. ಖರ್ಚಿಗೆ ಓಚರ್ ಇಲ್ಲದಿರುವುದು, ಒಂದು ಬಿಲ್‌ನಲ್ಲಿ 1000 ರೂ. ಹೆಚ್ಚು ಪಾವತಿ ಮಾಡಿರುವುದು, ಮಾಲುಗಳ ಮತ್ತು ಸಾಗಾಣಿಕೆ ದರದಲ್ಲಿ ಹೆಚ್ಚಳ, ಅಗತ್ಯ ಪ್ರಮಾಣಕ್ಕಿಂತ ಹೆಚ್ಚಿಗೆ ಕೊಟ್ಟಂತೆ ಲೆಕ್ಕದಲ್ಲಿ ತೋರಿಸಿರುವುದು– ಇವೇ ಮುಂತಾದುವು ಮೇಲ್ನೋಟಕ್ಕೆ ಕಾಣುವ ವ್ಯತ್ಯಾಸಗಳು ಎಂದು ಕಚ್ಚೋಡಿ ಶ್ರೀನಿವಾಸ್ ವಿವರಿಸಿದರು.

ಸೆ 24ರ ಸಂಜೆಯೊಳಗೆ ಆಡಿಟ್ ವರದಿ ಕೊಡುತ್ತೇವೆಂಬ ಭರವಸೆಯ ಮೇರೆಗೆ ದಲಿತ ಸಂಘರ್ಷ ಸಮಿತಿಯವರು ಚಳುವಳಿ ನಿಲ್ಲಿಸಿದ್ದಾರೆ. ಇವತ್ತು ಸಂಜೆಯೊಳಗಾದರೂ ತಲುಪಿಸಿ ಎಂದು ಅವರು ಒತ್ತಾಯಿಸಿದರು.

ಕೆ. ವಿ. ರಾಮಪ್ಪಯ್ಯ, "ನನಗೂ ದೂರು ಬಂದಿದೆ, ಹಿಂಡಿ, ತೌಡು ಇದರಲ್ಲಿ ಕಡೆ 3 ಲೋಡಿನ ಚಾರ್ಜು ಬರೆದಿರುವುದು ಮುಂತಾದ ದೂರುಗಳಿವೆ. ಏನೋ ಬಹಳ ವ್ಯತ್ಯಾಸವಾಗಿದೆ, ಅವ್ಯವಹಾರ ನಡೆದಿದೆ, ಕೂಡಲೇ ತನಿಖೆ ಮಾಡಿ ಕ್ರಮ ತಗೊಳ್ಳಿ" ಎಂದು ಒತ್ತಾಯಿಸಿದರು.

(ದ. ಸಂ. ಸ. ಸೆ. 24 ರಂದು ಶಾಸಕರು, ಜಿ. ಪ. ಅಧ್ಯಕ್ಷರು ರಾಮಪ್ಪಯ್ಯ ಮತ್ತು ಕಚ್ಚೋಡಿ ಇವರುಗಳಿಗೆ ಮನವಿಯೊಂದನ್ನು ಸಲ್ಲಿಸಿತ್ತು.)

### ಮುಖ್ಯ ಕಾರ್ಯದರ್ಶಿ 'ವಿವರಣೆ'

ಈ ಎಲ್ಲ ಚರ್ಚೆಗೆ ಉತ್ತರಿಸತೊಡಗಿದ ಮುಖ್ಯ ಕಾರ್ಯದರ್ಶಿ ಪಿ. ಎಸ್. ವಿ. ರಾವ್, "5 ತಿಂಗಳ ಹಿಂದೆ ನಾನು ಅಲ್ಲಿಗೆ ಹೋದಾಗ ನೀರಿನ ತೊಂದರೆಯ ಬಗ್ಗೆ ಮಾತ್ರ ಹೇಳಿದ್ದರು. 20 ಅಂಶ ಸಭೆಯ ನಿರ್ಣಯ ಬಂದಾಗ, ಉಪ ಕಾರ್ಯದರ್ಶಿಯನ್ನ ಕಳಿಸಲಾಗಿ ಲೆಕ್ಕ ಪತ್ರಗಳ ವಿವರಗಳು ಅರ್ಥವಾಗದೆ ವಾಪಸು ಬಂದರು. ಅನಂತರ ಚಳುವಳಿ ನಡೆಯುವ ವೇಳೆ ಗೋವಿಂದ ಗೌಡರ ಸೂಚನೆಯಂತೆ ಹೋದಾಗ ಸುಮಾರು 200–250 ಜನ ಸೇರಿದ್ದರು. ಮ್ಯಾನೇಜರನ್ನು ಸಸ್ಪೆಂಡ್ ಮಾಡಿ, ತನಿಖೆ ಆಗುವವರೆಗೂ ನಾನು ಅಲ್ಲೇ ಇರಬೇಕೆಂದು ಒತ್ತಾಯಿಸಿದರು. ಬೇರೆ ಕೆಲಸ ಇದೆಯೆಂದರೂ ಕೇಳದೆ ಅಡ್ಡಗಟ್ಟಿ 1–2 ಗಂಟೆ ಕಾಲ ಕೂರುವಂತಾಯಿತು...." ಎಂದರು.

(ಅವರ ಈ ಮಾತು ಬೇಕೆಂದೇ ಆಡಿದ ಹಸೀ ಸುಳ್ಳು. ತನಿಖೆ ಆಗುವವರೆಗೆ ಇರಬೇಕೆಂದು ಅವರನ್ನು ಚಳುವಳಿಕಾರರು ಒತ್ತಾಯಿಸಿದ್ದಲ್ಲ. 'ಆಡಿಟರ್‌ಗಳನ್ನು ಕರೆಸಿ, ಅವರು ಇಲ್ಲಿಗೆ ಬಂದ ನಂತರ ಹೋಗಿ' ... ಆದರೂ ಏನೂ ನಡೆದಿಲ್ಲನೆಂಬಂತೆ, ಇದೇನೋ ಕೆಲಸಕ್ಕೆ ಬಾರದ ಚಳುವಳಿಯೆಂಬ ತಾತ್ಸಾರದಿಂದಲೆಂಬತೆ ಅವರು "ನಾಳೆಯೋ ನಾಡಿದ್ದೋ ಕಳಿಸುತ್ತೇನೆ" ಎಂದುದರಿಂದ ಈ ರೀತಿ ಪಟ್ಟು ಹಿಡಿದಿದ್ದರು.)

### ಯೋಜನೆ ಮುಂದುವರಿಯುವುದು

"ಮೋಸ ಸರಿಪಡಿಸಿ, ಹಂದಿ ಸಾಕಣೆ ಕೇಂದ್ರ ಮುಂದುವರಿಯುವಂತೆ ಮಾಡಬೇಕೆಂಬುದು ಫಲಾನುಭವಿಗಳ ಬೇಡಿಕೆ. ಸದ್ಯಕ್ಕೆ ಅಲ್ಲಿ ಒಂದು ಹಂದಿಯೂ ಉಳಿದಿಲ್ಲ. ಆದರೆ ರಿವಾಲ್ವಿಂಗ್ ಫಂಡ್‌ನಲ್ಲಿ ಹಣ ಇದೆ. ಮಳೆಗಾಲ ಕಳೆದ ನಂತರ ಪುನಃ ಮರಿಗಳನ್ನು ತರಿಸಬಹುದೆಂದು ಮಂಡಲ ಪ್ರಧಾನರು ಸಲಹೆ ಮಾಡಿದ್ದಾರೆ. ಅದೇ ರೀತಿ ವ್ಯವಸ್ಥೆ ಮಾಡಲಾಗುವುದು" ಎಂದು ರಾವ್ ಸಭೆಗೆ ತಿಳಿಸಿದರು.

### ಮಾನವೀಯ ನಡವಳಿಕೆಗೆ ಪ್ರತೀಕಾರ ಕ್ರಮ ಸಲ್ಲದು

ಬಿಡಿಒ ಗೈರು ಹಾಜರಿಯಲ್ಲಿ ಅವರ ಪರವಾಗಿ ಸೂಪರ್‌ವೈಸರ್ ಗಂಗಾಧರ್ ಎಂಬವರು ಗ್ರಾ. ಬ್ಯಾಂಕ್ ಮ್ಯಾನೇಜರ್ ಜೊತೆ ಜಂಟಿಯಾಗಿ 4030 ರೂ. ಹಣವನ್ನು ರಿವಾಲ್ವಿಂಗ್ ಫಂಡ್‌ನಿಂದ ಹಂದಿಗಳ ಆಹಾರಕ್ಕಾಗಿ ತೆಗೆದಿದ್ದಾರೆ. ಇದು ನಿಯಮದ ರೀತ್ಯಾ ತಪ್ಪು. (ಆ ಹಣ ಮರಿಗಳನ್ನು ಕೊಳ್ಳಲು ಮಾತ್ರ.) ಈತನ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದೂ ಅವರು ಹೇಳಿದರು. ಅದೇ ರೀತಿ ಬಿಡಿಒ ಮತ್ತು ಗಂಗಾಧರ್‌ಗೆ ನೋಟೀಸು ನೀಡಲಾಗಿದೆಯೆಂದು ಗೊತ್ತಾಗಿದೆ.

ಆದರೆ ಅವ್ಯವಹಾರ ಬಯಲಾದ ನಂತರ, ಮರಿಗಳ ಆಹಾರಕ್ಕಾಗಿ ಹಣ ಕೊಡಲು ... ಗಳನ್ನು ಉಳಿಸಿಕೊಳ್ಳಲು ಬೇರೇನೂ ಮಾರ್ಗವಿಲ್ಲದೆ ಮಾನವೀಯ ದೃಷ್ಟಿಯಿಂದ ಈ ಹಣ ಬಳಸಿಕೊಳ್ಳಲಾಗಿದೆ. ಇದರಲ್ಲಿ ಯಾವುದೇ ಮೋಸವಿಲ್ಲ. ಆದರೆ ಮುಖ್ಯ ಕಾರ್ಯದರ್ಶಿಗಳು ತನಗಾದ ಮುಖಭಂಗಕ್ಕಾಗಿ ಯಾರ ಮೇಲಾದರೂ ಪ್ರತೀಕಾರ ಮಾಡುವ ಉದ್ದೇಶದಿಂದ ಈ ರೀತಿ ಕ್ರಮ ಕೈಗೊಂಡಿರುವ ಸಂದೇಹ ಮೂಡುತ್ತದೆ. ಜಿ. ಪ. ಇದಕ್ಕೆ ಅವಕಾಶ ಕೊಡಬಾರದು.

### ಅಧ್ಯಕ್ಷರ ಭರವಸೆ

ಫಲಾನುಭವಿಗಳ ಮೇಲೆ ಹೆಚ್ಚುವರಿ ಸಾಲದ (ತಲಾ 2 ಸಾವಿರ ರೂ.) ಹೊರೆಯಾಗಲಿ, ವ್ಯವಹಾರದಲ್ಲಿನ ವ್ಯತ್ಯಾಸದ ಹೊರೆಯಾಗಲಿ ಬೀಳದಂತೆ ಗ್ರಾಮೀಣ ಬ್ಯಾಂಕ್‌ನಿಂದಾಗಲಿ, ಜಿ. ಪರಿಷತ್ತಿನಿಂದಾಗಲಿ ಭರಿಸಿ ಯೋಜನೆ ಮುಂದುವರಿಸುವುದಾಗಿ ಜಿ. ಪ. ಅಧ್ಯಕ್ಷರು ಭರವಸೆಯಿತ್ತಿದ್ದಾರೆ.

ಆಡಿಟ್ ವರದಿಯ ಒಂದು ಪ್ರತಿಯನ್ನು ತನಗೂ ಒದಗಿಸಲು ದ. ಸಂ. ಸ. ಒತ್ತಾಯಿಸಿದೆ. ಈ ಮಧ್ಯೆ, ಲೆಕ್ಕ ಪರಿಶೋಧನೆ ಮುಗಿದು ತಪ್ಪಿತಸ್ಥರ ಮೇಲೆ ಕ್ರಮ ಕೈಗೊಳ್ಳಲಾಗುವುದರಿಂದಾಗಿ, ಚಳುವಳಿಯನ್ನು ನಿಲ್ಲಿಸಬೇಕೆಂದು ಜಿ. ಪ. ಮುಖ್ಯ ಕಾರ್ಯದರ್ಶಿಯವರು ಬಿಡಿಒ ಮೂಲಕ ದ. ಸಂ. ಸಮಿತಿಗೆ ಮನವಿ ಮಾಡಿ ಟೆಲಿಗ್ರಾಂ ಮಾಡಿದ್ದಾರೆ.

## ಟೆನ್ನಿಸ್ ಬಾಲ್ ಕ್ರಿಕೆಟ್ ಡಬಲ್ ವಿಕೆಟ್ ಟೂರ್ನಿ

ಕೊಪ್ಪ: ಪ್ರಪ್ರಥಮ ಬಾರಿಗೆ ನಗರ ಮಟ್ಟದ ಟೆನ್ನಿಸ್ ಬಾಲ್ ಕ್ರಿಕೆಟ್ ಡಬ್ಬಲ್ ವಿಕೆಟ್ ಟೂರ್ನಮೆಂಟ್ ತಾ॥ 2.10.87 ಮತ್ತು 3–10–87ರಂದು ಪುರಸಭಾ ಕ್ರೀಡಾಂಗಣದಲ್ಲಿ ನಡೆಯಲಿದ್ದು, ಭಾಗವಹಿಸುವ ಸ್ಪರ್ಧಿಗಳು ಪ್ರವೇಶ ಪತ್ರಕ್ಕಾಗಿ ಕಾರ್ಯದರ್ಶಿ, ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಷನ್, ಕೇರಾಫ್ ನ್ಯಾಷನಲ್ ಸ್ಟೋ...

# ಭಾರತೀಯ ಸನಾತನ ಧರ್ಮ (ಶೃತಿಗಳು) ಮತ್ತು ಈಗಿನ ಹಿಂದೂ ಧರ್ಮ (ಸ್ಮೃತಿಗಳು)

—ಸ್ವಾಮಿ ವಿವೇಕಾನಂದರ ದೃಷ್ಟಿಕೋನದಿಂದ

**ಕೃಷ್ಣ ಭಂಡಾರಿ**

ಭಾರತೀಯ ಸಮಾಜದ ಯಾವನೇ ಒಬ್ಬ ವಿಚಾರವಾದಿ ಇಲ್ಲಿನ ಸಂಪ್ರದಾಯದ ಅನಾಗರಿಕ ಕಟ್ಟು ಪಾಡುಗಳ ವಿರುದ್ಧ ದನಿಯೆತ್ತಿದರೆ ಅವನು ಸ್ವೇಚ್ಛಾಚಾರಿ. ಕಟ್ಟು ಪಾಡುಗಳನ್ನು ಮೀರಲು ಯತ್ನಿಸುವವನು, ಧರ್ಮ ದ್ರೋಹಿ ಮುಂತಾದ ಬಿರುಮ-ಬಾವಲಿಗಳ ಹಣೆ ಪಟ್ಟಿಯನ್ನು ಕಟ್ಟಲು ಯಥಾಸ್ಥಿತಿವಾದಿಗಳು ಯತ್ನಿಸುವುದನ್ನು ನೋಡುತ್ತೇವೆ. ನಮ್ಮ ಅನಾಗರಿಕ ಸಂಪ್ರದಾಯಗಳ ಅಸಹ್ಯ ಪಳೆಯುಳಿಕೆಯೇ ಇತ್ತೀಚಿಗೆ ರಾಜಾಸ್ತಾನದಲ್ಲಿ ನಡೆದ 'ಸತಿ' ಆಚರಣೆ. ಈ ಘಟನೆ ವಿಶ್ವದಲ್ಲೇ ನಮ್ಮನ್ನು ನಾಚಿ ತಲೆ ತಗ್ಗಿಸುವಂತೆ ಮಾಡಿದೆ. ಬಹುಶಃ ಹಿಂದೂ ಧರ್ಮವನ್ನು ಗಂಗಾ ನದಿಗೆ ಹೋಲಿಸುವ ಮಂದಿ ಹಾಗೂ ಪುರಿ ಪೀಠಾಧಿಪತಿಗಳಂಥವರು ಖುಶಿ ಪಟ್ಟು, 'ಪ್ರವಾಹದ ದಿಕ್ಕು ಬದಲಾಗಿಲ್ಲ' ಎಂದು ನೀಚ ತೃಪ್ತಿಯನ್ನು ಪಡೆಯಬಹುದು. (ಈ 'ಸತಿ' ಘಟನೆಗೆ ಸ್ವಲ್ಪ ಮುಂಚೆ ಪುರಿಯ ಶಂಕರಾಚಾರ್ಯರು 'ಸತಿ ಪದ್ಧತಿ ಬೇಕು' ಎಂಬರ್ಥದ ಹೇಳಿಕೆ ನೀಡಿದ್ದು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು.)

ನಮಗೆ ಇನ್ನೂ ಆ ಅನಾಗರಿಕ ಸಂಪ್ರದಾಯದ ಕಟ್ಟುಪಾಡುಗಳೇ ಬೇಕೆ? ಯಾವುದೇ ರೀತಿಯ ಕಟ್ಟುಪಾಡು ಬೇಡ ಅನ್ನುವವನು ವಿಚಾರವಾದಿಯಾಗಲಾರ.

(3ನೇ ಪುಟಕ್ಕೆ)

## ಮೋಸ

(ಪೂರ್ಣಗೊಳಿಸಿದ ಕಥೆ)

(ಹಿಂದಿನ ಸಂಚಿಕೆಯಲ್ಲಿ : ರಾಮು ಮತ್ತು ಸೋಮು ಎಂಬ ಇಬ್ಬರು ಗೆಳೆಯರು ಸೇರಿಕೊಂಡು ಒಂದು ಅಂಗಡಿ ಇಡುತ್ತಾರೆ. ಆದರೆ ಸ್ವಲ್ಪ ಕಾಲದನಂತರ ದುರಾಸೆಗೊಳಗಾದ ಸೋಮುವು ರಾಮು ಊರಿನಲ್ಲಿಲ್ಲದ ಸಮಯದಲ್ಲಿ ಅಂಗಡಿಯಲ್ಲಿದ್ದ ಸಾಮಾನನ್ನೆಲ್ಲ ಬೇರೆಕಡೆಗೆ ಸಾಗಿಸಿ ಬಚ್ಚಿಟ್ಟು, ಅನಂತರ ಕೈಕಾಲು ಕಟ್ಟಿಕೊಂಡು ಬಾಯಿಗೆ ಬಟ್ಟೆ ತುರುಕಿಕೊಂಡು ಅಂಗಡಿಯಲ್ಲಿ ಬಿದ್ದುಕೊಳ್ಳುತ್ತಾನೆ. ರಾಮು ಬಂದು ಕೇಳಿದಾಗ ಕಳ್ಳರು ತನ್ನನ್ನು ಕಟ್ಟಿ ಹಾಕಿ ಸಾಮಾನನ್ನೆಲ್ಲ ದೋಚಿಕೊಂಡು ಹೋದರೆಂದು ಹೇಳುತ್ತಾನೆ. 'ಮುಂದೇನು ಗತಿ!' ಎಂದು ರಾಮು ಯೋಚನೆಗೀಡಾಗುತ್ತಾನೆ...)

### I "ಪೋಲೀಸರಾ? ಅಯ್ಯೋ ಬೇಡಾ ...."

ರಾಮು, ಸೋಮುವಿನ ಸ್ಥಿತಿಯನ್ನು ನೋಡಿ ಕನಿಕರಗೊಂಡು ಅವನನ್ನು ಎತ್ತಿ ಸಮಾಧಾನಗೊಳಿಸಿದನು. ಸಾಮಾನೆಲ್ಲಾ ಕಳೆದು ಕೊಡಾಯಿತು, ಮುಂದೇನು– ಎಂದು ಯೋಚಿಸಿ, ಯೋಚಿಸಿ ರಾಮು ಸೋಮುವಿಗೆ ಹೇಳಿದ— "ಮೊದಲು ನಾವು ಈ ವಿಷಯವನ್ನು ಪೋಲೀಸರಿಗೆ ತಿಳಿಸೋಣ. ಅವರು ನಮಗೆ ರಕ್ಷಣೆಯನ್ನೂ ಕೊಡುತ್ತಾರೆ. ಮತ್ತು ಕಳ್ಳರನ್ನೂ ಪತ್ತೆ ಹಚ್ಚುತ್ತಾರೆ. ನಾಲ್ಕು ಒದ್ದ ಕೂಡಲೆ ಕಳ್ಳರು ಬಾಯಿ ಬಿಡುತ್ತಾರೆ. ಕಳ್ಳರನ್ನು ಹಿಡಿಯಲು ಇನ್ನೇನೂ ಮಾರ್ಗವಿಲ್ಲ. ನಡಿ, ಪೋಲೀಸ್ ಸ್ಟೇಷನ್ನಿಗೆ ಹೋಗಿ ಬರೋಣ"....

'ಪೋಲೀಸ್' ಶಬ್ದ ಕೇಳಿದ ಕೂಡಲೆ ಸೋಮು ಗಡಗಡ ನಡುಗಿದ. ಅವರು ಕೊಡುವ ಒದೆಯನ್ನು ನೆನೆದು ಹೆದರಿ ರಾಮುವಿನ ಕಾಲಿಗೆ ಬಿದ್ದು, "ನನ್ನನ್ನು ಕ್ಷಮಿಸಿ ಬಿಡುರಾಮು. ನಾನೇ ಸಾಮಾನನ್ನು ಸಾಗಿಸಿದ್ದು. ನಾನು ಅತಿ ಆಸೆಯಿಂದ ಈ ಕೆಲಸ ಮಾಡಿದೆ. ನಾನು ಮಾಡಿದ ಪಾಪಕೃತ್ಯಕ್ಕೆ ನೀನೇ ನನಗೆ ಏನಾದರೂ ಶಿಕ್ಷೆ ಕೊಡು. ಇನ್ನೆಂದೂ ನಾನು ಇಂತಹ ಕೆಲಸ ಮಾಡುವುದಿಲ್ಲ" ಎಂದ.

ಇದನ್ನು ಕೇಳಿ ರಾಮು ಅವನನ್ನು ಕ್ಷಮಿಸಿದ. ನಂತರ ಅವರಿಬ್ಬರೂ ಅಂಗಡಿಯಲ್ಲಿ ಚೆನ್ನಾಗಿ ವ್ಯಾಪಾರ ಮಾಡಿಕೊಂಡು ಸ್ನೇಹಿತರಾಗಿದ್ದರು.

**ಎ. ವಿ. ಸುಧಾ,**
5ನೇ ತರಗತಿ
ಆನೆಗುಂದ-ಶೃಂಗೇರಿ

### II "ಜಾಣತನವೊಂದಿದ್ದರೆ ...."

ಅಂಗಡಿಯ ನಷ್ಟದಿಂದ ರಾಮುವಿಗೆ ಬಹಳ ಬೇಸರವಾಯಿತು. ಹೀಗೇ ಚಿಂತಿಸುತ್ತ ಕುಳಿತಾಗ ಅವನಿಗೆ ಒಂದು ಯೋಚನೆ ಬಂತು. ಕಳ್ಳತನ ಆದದ್ದು ನಿಜವೆ ಅಥವಾ ಇದರಲ್ಲೇನಾದರೂ ಮೋಸವಿದೆಯೆ!? ಇದನ್ನು ಪರೀಕ್ಷಿಸಬೇಕು ಎಂದುಕೊಂಡ ರಾಮು.

"ಸೋಮು, ಕಳ್ಳತನವಾಯಿತೆಂದು ಹೀಗೆ ನಾವು ಯೋಚಿಸುತ್ತ ಕೂತರೆ ಪ್ರಯೋಜನವಿಲ್ಲ, ಇನ್ನು ಇದ್ದ ಸ್ವಲ್ಪ ಹಣದಿಂದ ಅಂಗಡಿಗೆ ಪುನಃ ಸಾಮಾನು ತರೋಣ. ಇನ್ನು ಮೇಲೆ ಬಹಳ ಜಾಗ್ರತೆಯಿಂದ ಇರೋಣ" ಎಂದು ಗೆಳೆಯನಿಗೆ ಹೇಳಿದ. ರಾಮುವಿಗೆ ಅನುಮಾನ ಬರಲಿಲ್ಲ, ಕಳ್ಳತನವಾಯಿತೆಂದೇ ನಂಬಿದ್ದಾನೆ ಎಂದು ಸೋಮು ಧೈರ್ಯಗೊಂಡ.

ಮತ್ತೆ ಸ್ವಲ್ಪ ದಿನದಲ್ಲಿ ರಾಮು ಪುನಃ ಕೆಲಸವಿದೆ ಎಂದು ಹೇಳಿ ಮಾವನ ಮನೆಗೆ ಹೋಗಿ ಬರುತ್ತೇನೆಂದ. ಆದಕ್ಕೆ ಸೋಮು ಒಪ್ಪದೆ, "ಇದೇನು ? ಕಳ್ಳತನ ಆಗಿ ಇನ್ನೂ ಸ್ವಲ್ಪ ದಿನ ಆಗಿನೆಯಪ್ಪೇ. ನನಗೆ ಭಯವಾಗುತ್ತೆ" ಎಂದ. ಆದರೆ ಅಕ್ಕಪಕ್ಕದಲ್ಲೆಲ್ಲ ಅಂಗಡಿಯಿದೆಯಲ್ಲ, ಭಯ ಬೇಡ. ಜಾಗ್ರತೆಯಾಗಿರು ಎಂದು ಧೈರ್ಯ ಹೇಳಿ ರಾಮು ಹೊರಟು ಹೋದ. ಸೋಮು ಒಳಗೊಳಗೇ ಸಂತೋಷಪಟ್ಟ.

ರಾತ್ರಿ ಸೋಮು ಯಾರಿಗೂ ಕಾಣದಂತೆ ಮತ್ತಷ್ಟು ಸಾಮಾನುಗಳನ್ನು ಗಂಟು ಕಟ್ಟಿಕೊಂಡು ಹೊರಟ. ಆಗ ಮರೆಯಲ್ಲಿ ಅಡಗಿದ್ದ ರಾಮು ಬಂದು ಅವನನ್ನು ಹಿಡಿದುಕೊಂಡ. ಸೋಮು ಹೆದರಿಕೆ, ನಾಚಿಕೆಯಿಂದ ಓಡಲು ಯತ್ನಿಸಿದ. ಆದರೆ ರಾಮು ಬಿಡದೆ, "ಸೋಮು, ಬೇರೆಯವರಿಗೆ ಹೇಳುವುದೇನು ? ಬೇಲಿಯೇ ಎದ್ದು ಹೊಲ ಮೇದ ಹಾಗಾಯ್ತು. ನಡೆ...." ಎನ್ನುವಷ್ಟರಲ್ಲಿ ಸೋಮು ಅವನನ್ನು ತಬ್ಬಿಕೊಂಡು ಕಣ್ಣೀರಿಟ್ಟ.

"ರಾಮು, ತಪ್ಪಾಯ್ತು. ದೊಡ್ಡ ಅಂಗಡಿ ಇಡುತ್ತೇನೆಂಬ ಆಸೆಯಿಂದ ಹೀಗೆ ಮಾಡಿದೆ. ಇನ್ನು ಹೀಗೆ ಮಾಡಲಾರೆ" ಎಂದ.

ಹೀಗೆ ರಾಮು ಬುದ್ಧಿವಂತಿಕೆಯಿಂದ ಸೋಮುವಿನ ಮೋಸವನ್ನು ಬಯಲು ಮಾಡಿದ್ದಲ್ಲದೆ ಅವನಿಗೆ ಸರಿಯಾಗಿ ಬುದ್ಧಿಯನ್ನೂ ಕಲಿಸಿದ್ದ.

**ಜಾಣತನವೊಂದಿದ್ದರೆ ಹೇಗಾದರೂ ಬದುಕಬಹುದು.**

**—ಎಚ್.ಡಿ. ಮೈತ್ರ,**
5ನೇ ತರಗತಿ, ಬಡ್ಡಿಗೆ

ಈ ಕಥೆಯನ್ನು ಬಹಳ ಜನ ಮಕ್ಕಳು ಪೂರ್ತಿಗೊಳಿಸಲು ಯತ್ನಿಸಿದ್ದಾರೆ 2ನೇ ಬಹುಮಾನಕ್ಕಾಗಿ ನಾಲ್ಕೈದು ಮಕ್ಕಳಲ್ಲಿ ತೀವ್ರ ಪೈಪೋಟಿ ಏರ್ಪಟ್ಟಿತ್ತು. ಈ ಎಲ್ಲ ಪುಟ್ಟ ಕತೆಗಾರರಿಗೆ ಹಾರ್ದಿಕ ಅಭಿನಂದನೆಗಳು. ಎ. ವಿ. ಸುಧಾ ಮತ್ತು ಎಚ್. ಡಿ. ಮೈತ್ರ ಇವರಿಗೆ ಬಹುಮಾನದ ಪುಸ್ತಕಗಳನ್ನು ಕಳಿಸಲಾಗುವುದು.

**—ಸಂಪಾದಕ.**

## ಮಳೆಯ ಸಂಗೀತ

ಸರಿಗಮ ಪದನಿಸ ಸಂಗೀತವಾ
ಹಾಡಿದೆ
ಆಕಾಶದಲ್ಲಿಯು ಮೋಡವು
ತುಂಬಿದೆ
ಸಂಗೀತದಿಂದ ರಾಗವು
ಕೇಳಿ ಬರುತಿದೆ
ಮೋಡದಿಂದ ಮಳೆಯು
ಸುರಿಯುತಿದೆ.
ಸಂಗೀತದ ವಿದ್ವಾಂಸನಾದರೆ
ಗೌರವ ದೊರಕುವುದು.
ಮೋಡದಿಂದ ಮಳೆಯಾದರೆ
ಬೆಳೆಯು ಬೆಳೆಯುವುದು
ಸಂಗೀತದ ಗೆಳೆಯ
ರಾಗ, ನಾದಗಳಾದರೆ
ಮಳೆಯ ಗೆಳೆಯ
ಗಾಳಿಯಾಗಿದೆ.

**—ಕೆ. ಶ್ರೀನಾಥ್**
7ನೇ ತರಗತಿ, ಕೊಪ್ಪ.




## ಜಾಣ ಪ್ರಶ್ನೆಗಳು

1. ಗೀತಾ ತನ್ನ ಗೆಳತಿಗೆ ಹೇಳಿದಳು: "ನನ್ನ ತಾಯಿ ಒಂದು ಮಗುವಿಗೆ ಜನ್ಮ ವಿತ್ತಿದ್ದಳು. ಆ ಮಗು ನನಗೆ ಅಕ್ಕ-ತಂಗಿಯಾಗಲಿ, ಅಣ್ಣ-ತಮ್ಮನಾಗಲಿ ಆಗುವುದಿಲ್ಲ." ಹಾಗಾದರೆ ಆ ಮಗು ಯಾರು ?
2. ಇಬ್ಬರು ತಾಯಿ, ಇಬ್ಬರು ಮಗಳು ಒಂದು ಅಂಗಡಿಗೆ ಹೋಗಿ ಮೂರು ಬಾಳೆಹಣ್ಣು ಕೊಂಡು ಪ್ರತಿಯೊಬ್ಬರೂ ಒಂದೊಂದು ಹಣ್ಣನ್ನು ತಿನ್ನುತ್ತಾರೆ. ಇದು ಸಾಧ್ಯವೆ ? ಹಾಗಾದರೆ ಹೇಗೆ ?
3. ಟಿ. ವಿ. ಯನ್ನು ಕಂಡು ಹಿಡಿದವನು ಯಾರು ?
4. ವರ್ಷಗಳು ಹೆಚ್ಚಾಗುತ್ತಾ ಹೋದಂತೆ ಕಡಿಮೆಯಾಗುವುದು ಯಾವುದು ?

ಸಂಗ್ರಹ : **ಎಂ. ಎಂ. ವೀಣಾ**
8ನೇ ತರಗತಿ, ಜಯಪುರ.

## ಇವು ನಿಮಗೆ ಗೊತ್ತೆ

1. ಬಾಲ್ ಪಾಯಿಂಟ್ ಪೆನ್ನನ್ನು ಕಂಡು ಹಿಡಿದವನು
—ಲಾಸ್ಲೋ ಜೋಸೆಫ್ ಬಿರೋ ಎಂಬಾತ.
2. ಐಸ್‌ಕ್ರೀಂ ಮಾಡುವುದನ್ನು ಕಂಡು ಹಿಡಿದವನು
—ಯಾತ್ರಿಕ ಮಾರ್ಕೋ ಪೋಲೋ.
3. ಮೋಟರ್ ಬೋಟನ್ನು ಕಂಡು ಹಿಡಿದವನು
—ಆಲ್‌ವಿನ್ ರೋಟ್ ಎಂಬಾತ.
4. ಏಷ್ಯಾ ಖಂಡದಲ್ಲಿ ಮೊಟ್ಟ ಮೊದಲ ಬಾರಿಗೆ ಪ್ರಯಾಣಿಕರ ರೈಲನ್ನು ಆರಂಭಿಸಿದ ದೇಶ
—ಭಾರತ, 1854 ರಲ್ಲಿ
5. ಪ್ರಪಂಚದ ಹೊಸ ಖಂಡ
—ಅಂಟಾರ್ಕ್‌ಟಿಕ.

ಸಂಗ್ರಹ : ಎಂ. ಎಸ್. ಸುಬ್ರಮಣ್ಯ.
ಲೋಕನಾಥಪುರ

## ತಂದೆ ಹೇಳಿದ್ದು

ಚೇಳು ಕಡಿದರೆ ನೋವು ಸಹಿಸಬಹುದಂತೆ.
ಹಾವು ಕಡಿತಕ್ಕೆ ಔಷಧಿ ಇದೆಯಂತೆ.
ಆನೆ ಆರ್ಭಟಿಸಿದರೆ
ಅಂಕುಶ ಶಿಕ್ಷಿಸುವುದಂತೆ.
ಹುಲಿಯೊಡನೆ ಸ್ನೇಹ ಸಾಧ್ಯವಂತೆ !
ಮೊಸಳೆಯನ್ನೂ ಕೂಡ ಸಾಕಬಹುದಂತೆ.
ಗೆಳೆಯರೇ,
ಭೋಪಾಲದ ವಿಷಾನಿಲ
ತಲೆತಲಾಂತರದ ಕೆಡುಕು.
ಇದಕ್ಕೆ ಮಾತ್ರ ಔಷಧಿ ಇಲ್ಲವಂತೆ !
ನನ್ನಪ್ಪ ಹೀಗೆ ಎಂದಾಗ ನಾನು
ಹೌಹಾರಿ ನಿಂತೆ !
ಸಂಶೋಧನೆಗಳಿಂದ ಎಂಥಾ ಚಿಂತೆ !

● **ಮಹೇಶ ಶಂ. ಗಂಗಾಯಿ (11)**
ಬೆಳ್ಳಟ್ಟಿ
(ಸೌಜನ್ಯ : ತರಂಗ)

## ಓದುಗರ ಪತ್ರಗಳು

### ನಿಲುವಾಗಿಲು ಸಭ್ಯ ಜನತೆಗೆ ಅಪಮಾನ ಎಸಗುತ್ತಿರುವ ಕುಕರ್ಮಿಗಳು

ಮಾನ್ಯರೆ,

ಈಚೆಗೆ ಕೊಪ್ಪ ಸುತ್ತಮುತ್ತ ಕೆಲವು ಕುಕರ್ಮಿಗಳು ಬೇಡದ ಧಾಂಧಲೆ ನಡೆಸಿ, ತಾವು ನಿಲುವಾಗಿಲುಕಡೆಯವರೆಂದು ಹೇಳಿಕೊಳ್ಳುತ್ತಿದ್ದಾರೆ. ಇದರಿಂದ ನಿಲುವಾಗಿಲಿನ ಸಭ್ಯ ಜನತೆಗೆ ಅವಮಾನವಾಗುತ್ತಿದೆಯಲ್ಲದೆ ದೈನಂದನ ಚಟುವಟಿಕೆಗಳಿಗೂ ಅಡಚಣೆ ಉಂಟಾಗುತ್ತಿದೆ.

ಈಚೆಗೆ ಕೊಪ್ಪದಲ್ಲಿ ನಡೆದ ಒಂದು ದುರ್ಘಟನೆಯಲ್ಲಿ ಯಾವುದೋ ಊರಿನ ಒಬ್ಬ ಸತೀಶ ಎನ್ನುವ ವ್ಯಕ್ತಿಯು ಸೇರಿಕೊಂಡಿದ್ದು, 'ನಿಲುವಾಗಿಲು ಕಡೆಯ ಸತೀಶ' ಎಂದು ದೂರು ದಾಖಲಾಗಿದ್ದರಿಂದ ನಿಲುವಾಗಿಲಿನ ಸುತ್ತ ಮುತ್ತ ಇರುವ ಸತೀಶ ಎಂಬ ಹೆಸರಿನ ಎಲ್ಲರನ್ನೂ ಕರೆಸಿ ಮಾನಸಿಕ ಹಿಂಸೆಗೊಳಪಡಿಸುತ್ತಿದ್ದಾರೆ, ಈ ಪೋಲೀಸ್ ಅಧಿಕಾರಿಗಳು ! ಸದರಿ ಆಪಾದಿತ ಸತೀಶನಿಗೂ ನಿಲುವಾಗಿಲಿಗೂ ಯಾವುದೇ ರೀತಿಯ ಸಂಬಂಧವಿಲ್ಲವೆಂದು ಅಧಿಕಾರಿಗಳಿಗೂ ಸಾರ್ವಜನಿಕರಿಗೂ ಈ ಮೂಲಕ ತಿಳಿಯಪಡಿಸುತ್ತೇವೆ.

—ಇತಿ ನೊಂದ ಗ್ರಾಮಸ್ಥರು
(34 ಜನರ ಸಹಿಗಳಿವೆ.)

## ನೆಮ್ಮಾರು ಹಂದಿ ಸಾಕಾಣಿಕೆ ಘಟಕ : ತನಿಖೆ ವರದಿ ಬಂದೊಡನೆ ತಪ್ಪಿತಸ್ಥರ ವಿರುದ್ಧ ನಿರ್ದಾಕ್ಷಿಣ್ಯ ಕ್ರಮ — ಅಚ್ಯುತಪೈ

ಮಾನ್ಯರೆ,

ನೆಮ್ಮಾರು ಗ್ರಾಮದ ಹೊಸಕೆರೆ ಸಾಮುದಾಯಿಕ ಹಂದಿ ಸಾಕಾಣಿಕೆ ಕೇಂದ್ರದ ಬಗ್ಗೆ ತಮ್ಮ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿರುವ ವರದಿಗಳಿಗೆ ಕೆಲವು ಸ್ಪಷ್ಟೀಕರಣಗಳನ್ನು ನೀಡಬಯಸುತ್ತೇವೆ.

ಈ ಘಟಕದ ನಿರ್ವಹಣೆಯನ್ನು ಫಲಾನುಭವಿಗಳ ಸಹಕಾರದಿಂದ ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದಿದ್ದರೂ, ವೈರಸ್ ಕಾಯಿಲೆಯಿಂದಾಗಿ ಹೆಚ್ಚಿನ ಪ್ರಮಾಣದಲ್ಲಿ ಹಂದಿಗಳ ಮರಣ ಸಂಭವಿಸಿದ್ದರಿಂದ ಮತ್ತು ಮರಿ ಹಾಕುವಲ್ಲಿ ಆದ ವಿಳಂಬದಿಂದಾಗಿ ಲಾಭ ಗಳಿಸುವುದು ಸಾಧ್ಯವಾಗಿರಲಿಲ್ಲ. ಘಟಕದ ಪರಿಶೀಲನೆಗೆ ಬೆಂಗಳೂರಿನಿಂದ ಹಿರಿಯ ಪಶುವೈದ್ಯಾಧಿಕಾರಿಗಳೂ ಭೇಟಿ ನೀಡಿದ್ದು ಬ್ಯಾಂಕಿನೊಂದಿಗೆ ನಡೆಸಿದ ಸಮಾಲೋಚನೆಯ ಪ್ರಕಾರ, ಘಟಕದ ಜೋಪಾಸನೆಗೆ ಯೋಜನೆಯೊಂದನ್ನು ಸಿದ್ಧಪಡಿಸಲು ಉದ್ದೇಶಿಸಲಾಗಿತ್ತು.

ತಮ್ಮ ಪತ್ರಿಕೆಯಲ್ಲಿ ಘಟಕದ ವಿಫಲತೆಯ ಬಗ್ಗೆ ಮೊದಲ ವರದಿಯು ಪ್ರಕಟವಾದ ತಕ್ಷಣ ನಮ್ಮ ಲೆಕ್ಕ ಪರಿಶೋಧಕರನ್ನು ನೆಮ್ಮಾರು ಶಾಖೆಗೆ ಕಳುಹಿಸಿಕೊಟ್ಟು ಘಟಕದ ವಿವರಗಳನ್ನು ಪರಿಶೀಲಿಸಲಾಗಿದೆ. ಮೊದಲ ವರದಿಯ ಪ್ರಕಾರ ಘಟಕದ ಲೆಕ್ಕಪತ್ರಗಳನ್ನು ಇಡುವ ಕಾರ್ಯ ವಿಧಾನದಲ್ಲಿ ಕೆಲವೊಂದು ಲೋಪದೋಷಗಳು ಕಂಡುಬಂದುವಾದರೂ, ದುರ್ವ್ಯವಹಾರ ನಡೆದ ಬಗ್ಗೆ ಮೇಲ್ನೋಟಕ್ಕೆ ಯಾವುದೇ ಆಧಾರಗಳು ಕಂಡು ಬಂದಿಲ್ಲ. ಆದರೂ, ಶಾಖೆಯ ಸಂಪೂರ್ಣ ತನಿಖೆಯನ್ನು ಈ ತಿಂಗಳ ಒಂದನೇ ತಾರೀಖಿನಿಂದಲೇ ಪ್ರಾರಂಭಿಸಿದ್ದೇವೆ.

ಸಂಬಂಧಪಟ್ಟ ಎಲ್ಲಾ ಫಲಾನುಭವಿಗಳಿಗೆ ಸಂಪೂರ್ಣ ಮಾಹಿತಿಯನ್ನು ಪಡೆಯಲು ಸೆ. 16 ರಂದು ನೆಮ್ಮಾರು ಶಾಖೆಗೆ ಬರುವಂತೆ ಸೆ. 11 ರಂದು ಆಹ್ವಾನಿಸಿ, ವಿವರಗಳನ್ನು ನೀಡಲು ಶಾಖಾಧಿಕಾರಿಗೆ ಆದೇಶ ನೀಡಿದ್ದೆವು. ಈಗ ಘಟಕದ ಖರ್ಚುವೆಚ್ಚದ ಖಾತೆವಾರು ವಿವರಗಳನ್ನು ಶಾಖೆಯಲ್ಲಿ ಇಡಲಾದ ಲೆಕ್ಕಪತ್ರಗಳ ಪ್ರಕಾರ ಫಲಾನುಭವಿಗಳಿಗೆ ತಲುಪಿಸಲು ಮತ್ತೆ ಶಾಖಾಧಿಕಾರಿಗೆ ತಿಳಿಸಲಾಗಿದೆ. ಈ ಮಧ್ಯೆ ಜಿಲ್ಲಾ ಪರಿಷತ್ತಿನಿಂದಲೂ ಲೆಕ್ಕ ಪರಿಶೋಧನೆಯ ವ್ಯವಸ್ಥೆಯಾಗಿದ್ದು, ಈ ದಿಸೆಯಲ್ಲಿ ಅವರಿಗೆ ಎಲ್ಲ ರೀತಿಯ ಸಹಕಾರಗಳನ್ನು ನೀಡುವಂತೆ ಶಾಖಾಧಿಕಾರಿಗೆ ನಿರ್ದೇಶಿಸಿದ್ದೇವೆ.

ಶಾಖೆಯ ತನಿಖೆಯ ವರದಿ ಹಾಗೂ ಜಿಲ್ಲಾ ಪರಿಷತ್ತಿನ ವರದಿ ಬಂದೊಡನೆ ಆ ಪ್ರಕಾರ ಬ್ಯಾಂಕ್ ಸಿಬ್ಬಂದಿಯವರಿಂದ ಯಾವುದೇ ದುರ್ವ್ಯವಹಾರ ನಡೆದಿದೆಯೆಂಬುದಾಗಿ ಕಂಡುಬಂದರೆ, ಅವರ ಮೇಲೆ ಬ್ಯಾಂಕಿನ ಸೇವಾ ನಿಯಮಗಳಿಗನುಗುಣವಾಗಿ ಸೂಕ್ತ ಶಿಸ್ತಿನ ಕ್ರಮವನ್ನು ನಿರ್ದಾಕ್ಷಿಣ್ಯವಾಗಿ ಕೈಗೊಳ್ಳುತ್ತೇವೆ. ಯಾವುದೇ ಸಂದರ್ಭದಲ್ಲಿ ಫಲಾನುಭವಿಗಳ ಹಿತರಕ್ಷಣೆಯನ್ನು ಆದ್ಯತೆಯಿಂದ ನೋಡಿಕೊಳ್ಳುವ ಜವಾಬ್ದಾರಿಯನ್ನು ಬ್ಯಾಂಕು ವಹಿಸಿಕೊಳ್ಳುತ್ತದೆಂದು ಸ್ಪಷ್ಟಪಡಿಸುತ್ತೇವೆ.

—ಕೆ. ಅಚ್ಯುತ ಪೈ,
ಅಧ್ಯಕ್ಷರು,
ಚಿಕ್ಕಮಗಳೂರು–ಕೊಡಗು
ಗ್ರಾಮೀಣ ಬ್ಯಾಂಕ್.

## ಭಾರತೀಯ ಸನಾತನ ಧರ್ಮ ಮತ್ತು ಈಗಿನ ಹಿಂದೂ ಧರ್ಮ

(2ನೇ ಪುಟದಿಂದ)

ಆದರೆ ಅದು ಹೇಗಿರಬೇಕು ಎಂದು ಸ್ಪಷ್ಟವಾಗಿ ಗುರುತಿಸಿಕೊಳ್ಳುವವನು ಖಂಡಿತ ಅನಾಗರಿಕ ಸ್ವೇಚ್ಛಾಚಾರಿಯಾಗಲಾರ. ಕಟ್ಟುಪಾಡುಗಳು ಬೇಕು; ಆದರೆ ಅವು ಹೇಗಿರಬೇಕು ? ಎಂಬುದು ಮುಖ್ಯ. ಚಾಲ್ತಿಯಲ್ಲಿರುವ ಎಲ್ಲ ಕಟ್ಟುಪಾಡುಗಳೂ ಧರ್ಮ-ಸಂಸ್ಕೃತಿಯ ಅವಿಭಾಜ್ಯ ಅಂಗಗಳು; ಅವನ್ನು ಬದಲಿಸಲಾಗದು, ಅವೆಲ್ಲವೂ ಇರಲೇಬೇಕು ಎನ್ನುವುದು ಮಾತ್ರ ಅವಿಚಾರ, ಕುರುಡು ನಂಬಿಕೆ ಎಂಬುದು ಖಚಿತ.

ನಮ್ಮ ಋಷಿಗಳು ಕಂಡುಹಿಡಿದ, ವಿಶ್ವದ ಸರ್ವ ಸೃಷ್ಟಿಯಲ್ಲೂ ಸಮಭಾವವನ್ನು ಆರೋಪಿಸಿದ; ಮೂಲದಲ್ಲೇ ಸಮತಾವಾದವನ್ನು ಬೋಧಿಸಿದ, ಆತ್ಮತತ್ತ್ವದ, ಭಾರತೀಯ ಸನಾತನ ತತ್ವದ ಜ್ಞಾನ ದೀವಿಗೆ, ಭದ್ರ ಬುನಾದಿ–**ಶೃತಿಗಳು.** ಭಾರತೀಯ ಮಧ್ಯಯುಗದ ಸ್ವಾರ್ಥಪರ ಸಾಮಾಜಿಕ ವ್ಯವಸ್ಥೆಯ, ಅನಾಗರಿಕ ಕಟ್ಟುಪಾಡಿನ, ಜನ ಜೀವನದ ನಡವಳಿಕೆಯ ಸಂವಿಧಾನವೇ **ಸ್ಮೃತಿಗಳು.**

ಈ ಸ್ಮೃತಿಗಳು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ಭಿನ್ನತೆ, ದ್ವೈತ, ಮೇಲು–ಕೀಳು ಮುಂತಾದುವನ್ನು ಸೃಷ್ಟಿಸಿ ಶೃತಿಗಳನ್ನೂ ನಿರ್ದೇಶಿಸುವ ಉದ್ಧಟತನಕ್ಕೆ ಕೈ ಹಾಕಿರುವುದರಿಂದ ಇವು ವರ್ಜ್ಯ. ಇನ್ನೂ ಈ ಸ್ಮೃತಿಗಳ ಕಟ್ಟುಪಾಡಿನ ಪಳಿಯುಳಿಕೆಗೆ ಜೋತು ಬೀಳುವುದು ಖಂಡಿತ ಇಂದಿನ ಹಿಂದೂ ಧರ್ಮದ ಮೂರ್ಖತನವಾದೀತು.

ಇದಕ್ಕೆ ಪುಷ್ಟಿಯಾಗಿ, ಭಾರತೀಯ ಗಂಡು ಗರ್ಭದ ಬಸಿರಿನಿಂದ ಆವಿರ್ಭವಿಸಿರುವ ಕ್ರಾಂತಿಕಾರಿ ವಿಚಾರವಂತರೂ, ಭಾರತೀಯ ಧರ್ಮ–ಶಾಸ್ತ್ರದ ವಸ್ತುನಿಷ್ಠ ವಿಮರ್ಶಕರೂ, ಭಾರತೀಯ ಸನಾತನ ತತ್ವಜ್ಞಾನಿಗಳೂ ಆದ ಸ್ವಾಮಿ ವಿವೇಕಾನಂದರು ತಮ್ಮ ಉಪನ್ಯಾಸಗಳಲ್ಲಿ ಹೇಳಿರುವ ಕೆಲವಂಶಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದೆ:

"ಸ್ಮೃತಿಯೇ ಪರಮ ಪ್ರಮಾಣವಲ್ಲ. ವೇದಾಂತದ ಪ್ರಮಾಣಕ್ಕೆ ಚ್ಯುತಿಯನ್ನು ತರುವಂತಹುದು ಸ್ಮೃತಿಯಲ್ಲ. ಅಂತಹುದು ಏನಾದರೂ ಇದ್ದರೆ ಆಗ ಸ್ಮೃತಿಯನ್ನು ತ್ಯಜಿಸಬಹುದು. ಅದಕ್ಕೆ ಪ್ರಮಾಣವಿಲ್ಲ. ಈ ಸ್ಮೃತಿಗಳು ಕಾಲ ಕಾಲಕ್ಕೆ, ಯುಗ ಯುಗದಲ್ಲಿ ಬದಲಾಗಿವೆ. ಜನಾಂಗದ ಸ್ಥಿತಿ ಬದಲಾದ ಹಾಗೆ ಹಲವು ಸಮಸ್ಯೆಗಳನ್ನು ಜನಾಂಗ ಎದುರಿಸಿದಾಗ ಅವರ ಆಚಾರ – ವ್ಯವಹಾರಗಳು ಬದಲಾದವು. ಜನಾಂಗದ ಆಚಾರ – ವ್ಯವಹಾರಗಳನ್ನು ಕ್ರಮಪಡಿಸುವುದೇ ಸ್ಮೃತಿಯ ಮುಖ್ಯ ಗುರಿಯಾದುದರಿಂದ ಅವೂ ಕಾಲಕಾಲಕ್ಕೆ ಬದಲಾಗಬೇಕಾಯ್ತು. ಇದನ್ನು ಜ್ಞಾಪಕದಲ್ಲಿಡಬೇಕೆಂದು ನಿಮಗೆ ಹೇಳುತ್ತಿದ್ದೇನೆ."

"ಕೆಲಸಕ್ಕೆ ಬಾರದ ವಿಷಯದ ಕುರಿತು ಚರ್ಚಿಸುವುದನ್ನು ತ್ಯಜಿಸಿ. ಕಳೆದ ಹಲವು ಶತಮಾನಗಳಿಂದಲೂ ನಮ್ಮ ಅವನತಿಯ ಕಾಲದಲ್ಲಿ ನೂರಾರು ವಿದ್ಯಾವಂತರು, "ನಾವು ನೀರನ್ನು ಎಡಗೈಯಿಂದ ಕುಡಿಯುವುದೇ ಅಥವಾ ಬಲಗೈಯಿಂದ ಕುಡಿಯುವುದೇ; ಅದನ್ನು ಮೂರು ಸಲ ತೊಳೆಯುವುದೆ ಅಥವಾ ನಾಲ್ಕು ಸಲ ತೊಳೆಯುವುದೇ; ಬಾಯನ್ನು ಐದು ಸಲ ಮುಕ್ಕಳಿಸುವುದೇ ಅಥವಾ ಆರು ಸಲ ಮುಕ್ಕಳಿಸುವುದೇ" — ಮುಂತಾದ ವಿಷಯಗಳನ್ನೇ ಚರ್ಚಿಸುವುದನ್ನು ನೋಡಿ ! ಇಂತಹ ಅಪ್ರಮುಖ ವಿಷಯಗಳನ್ನು ಚರ್ಚಿಸುತ್ತ ಅವುಗಳ ಮೇಲೆ ಬೇಕಾದಷ್ಟು ಶಾಸ್ತ್ರವನ್ನೇ ಬರೆಯುವುದರಿಂದ ನೀವು ಏನನ್ನು ನಿರೀಕ್ಷಿಸಬಲ್ಲಿರಿ ! ನಮ್ಮ ಧರ್ಮ ಅಡಿಗೆ ಮನೆಯನ್ನು ಸೇರುವ ಅಪಾಯವಿದೆ. ಮುಕ್ಕಾಲು ಪಾಲು ಜನ ಈಗ ವೇದಾಂತಿಗಳೂ ಅಲ್ಲ, ಪೌರಾಣಿಕರೂ ಅಲ್ಲ, ತಾಂತ್ರಿಕರೂ ಅಲ್ಲ, ಶಾಕ್ತರೂ ಅಲ್ಲ. ನಾವು **"ಮುಟ್ಟಬೇಡಿ ಎನ್ನುವವರು"** ಆಗಿರುವೆವು. ನಮ್ಮ ಧರ್ಮ ಅಡಿಗೆ ಮನೆಯಲ್ಲಿದೆ ಅಡಿಗೆ ಮಾಡುವ ಪಾತ್ರೆಯೇ ನಮ್ಮ ದೇವರು. "ನಾನು ಮಡಿ, ನನ್ನನ್ನು ಮುಟ್ಟಬೇಡಿ"— ಇದೇ ನಮ್ಮ ಧರ್ಮವಾಗಿದೆ.

ಹೀಗೇ ಮತ್ತೊಂದು ಶತಮಾನ ಕಳೆದರೆ ನಾವೆಲ್ಲಾ ಹುಚ್ಚರ ಆಸ್ಪತ್ರೆಯನ್ನು ಸೇರಬೇಕಾದೀತು. ಜೀವನದ ಗಹನ ವಿಷಯಗಳನ್ನು ತಿಳಿದುಕೊಳ್ಳಲಾರದೇ ಬುದ್ಧಿ ಮಂದವಾಗುತ್ತಿದೆ. ಮನಸ್ಸು ಎಲ್ಲಾ ಸ್ವಾತಂತ್ರ್ಯವನ್ನೂ ಕಳೆದುಕೊಂಡು, ದುರ್ಬಲವಾಗಿ, ಜಡವಾಗಿ, ಅಚಲವಾಗುವುದು. ಅದು ಯಾವುದೋ ಒಂದು ಹಿಂದಿನ ಅಭ್ಯಾಸದ ವೃತ್ತದ ಸುತ್ತಲೂ ಸುತ್ತುತ್ತಿರುವುದು. ಮೊದಲು ಈ ಸ್ವಭಾವದಿಂದ ಪಾರಾಗಬೇಕು".

"ಜಗತ್ತು ಯುಗ ಪ್ರವಾಹ ಸಂಬಂಧವಾದ ಅದ್ಭುತ ನಿಯಮಾವಳಿಯ ಮೇಲೆ ನಿಂತಿದೆ. ಪ್ರಕೃತಿಯ ಸರ್ವವ್ಯಾಪಿ ನಿಯಮಾವಳಿಯ ಮೇಲೆ ನಿಂತ ಸನಾತನ ತತ್ವಗಳು ಇವು. ಎರಡನೆಯದು ಗೌಣ ನಿಯಮಗಳು. ಇವು ದೈನಂದಿನ ಕಾರ್ಯನಿರ್ವಾಹಕ್ಕಾಗಿ. **ಇವು ಪುರಾಣಕ್ಕೆ, ಸ್ಮೃತಿಗೆ ಸೇರಿವೆ, ಶೃತಿಗಲ್ಲ. ಇದಕ್ಕೂ ಅಧ್ಯಾತ್ಮ ತತ್ವಕ್ಕೂ ಸಂಬಂಧವಿಲ್ಲ.** ನಮ್ಮ ದೇಶದಲ್ಲಿ ಈ ಗೌಣ ನಿಯಮಗಳು (ಕಾನೂನು) ಕಾಲಕಾಲಕ್ಕೆ ಬದಲಾಗುತ್ತಿದೆ. ಒಂದು ಕಾಲದ, ಒಂದು ಯುಗದ ಆಚಾರ ವ್ಯವಹಾರಗಳು ಮತ್ತೊಂದು ಕಾಲಕ್ಕೆ, ಮತ್ತೊಂದು ಯುಗಕ್ಕೆ ಅನ್ವಯಿಸುವುದಿಲ್ಲ. ಯುಗವಾದ ಮೇಲೆ ಯುಗ ಬರುವುದರಿಂದ ಅವು ಇನ್ನೂ ಬದಲಾಗುತ್ತಿವೆ. ಪ್ರಪಂಚಕ್ಕೆ ವಿದ್ಯೆ ಮತ್ತು ಸಂಸ್ಕೃತಿ ಇನ್ನೂ ಬರಬೇಕಾಗಿದೆ. ಎಲ್ಲಿಯೂ ಸಂಸ್ಕೃತಿ ಇನ್ನೂ ಗರಿಕರು".

"ಈ ಆಧುನಿಕ ಕಾಲದಲ್ಲಿ ಕೆಲವು ಬದಲಾವಣೆಗಳು ಆವಶ್ಯಕವಾದರೆ ಅದನ್ನು ಮಾಡಬೇಕು. ಅವನ್ನು ಹೇಗೆ ಮಾಡಬೇಕೆಂದು ಮಹಾ ಋಷಿಗಳು ಜನಿಸಿ ಆಯಾಯ ದೇಶ–ಕಾಲಗಳಿಗೆ ಉಪಯೋಗವಾಗುವಂತಹ ನವ ನವ ಆಚಾರ–ವ್ಯವಹಾರಗಳನ್ನು ಜಾರಿಗೆ ತರುವರು".

* * *

ಸರಿಯಾಗಿ 90 ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದರ ಮೂಲಕ ಹೊರ ಬಂದಿರುವ, ನಮ್ಮ ಧರ್ಮಾಚರಣೆಯ ಬಗ್ಗೆ ವಿಮರ್ಶೆಯ ರೂಪದಲ್ಲಿರುವ ಈ ಮಾತುಗಳು ಎಷ್ಟು ಸತ್ಯ ಅಲ್ಲವೆ ? "ಮಹಾ ಋಷಿಗಳು ಜನಿಸಿ ಬದಲಾವಣೆ ಹೇಗೆ ಮಾಡಬೇಕೆಂದು ಹೇಳುವರು" ಸ್ವಾಮೀಜಿಯ ಈ ಋಷಿವಾಣಿ ಎಷ್ಟು ನಿಖರವಾದ ಸತ್ಯ ! ಸ್ವಾತಂತ್ರ್ಯ ಪೂರ್ವದ ಸುಮಾರು 50 ವರ್ಷಗಳಲ್ಲಿ ನಮ್ಮ ದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬ ಸುಧಾರಣಾವಾದಿಗಳು, ಸ್ವಾತಂತ್ರ್ಯ ಹೋರಾಟಗಾರರು, ಇವರೆಲ್ಲ ಒಬ್ಬೊಬ್ಬರೂ ಮಹಾನ್ ಋಷಿಗಳಂತೆಯೇ ಅಲ್ಲವೆ ? ಆ ಮಹಾಋಷಿಗಳು ಜನಿಸಿ ನವ ಆಚಾರ, ವ್ಯವಹಾರಗಳನ್ನು ಹೇಳಿದರು. ಹಲವಾರು ಹೊಸ ಬದಲಾವಣೆಗಳನ್ನು ತಂದರು.

ಆದರೆ, ನಾವು.... ? ಅವರು ಕೊಟ್ಟ ಜ್ಯೋತಿಯನ್ನು ಕೈಯಲ್ಲಿ ಹಿಡಿದಿದ್ದೇವೆ. ಆದರೆ ಕಣ್ಣು ಮುಚ್ಚಿ "ಕತ್ತಲೆ ಕತ್ತಲೆ" ಎನ್ನುತ್ತಾ ಎಡವುತ್ತಾ ನಡೆಯುತ್ತಿದ್ದೇವೆ ! ಹಿಂದೂ ಧರ್ಮದ ಯಾವುದೇ ಅನಿಷ್ಟಗಳನ್ನೂ ಖಂಡಿಸಬಾರದು; ಹಿಂದೂ ಧರ್ಮ ತನ್ನಷ್ಟಕ್ಕೆ ಸುಧಾರಣೆಯಾಗುತ್ತದೆ ಎನ್ನುವ ಮಂದಿಗಳು ಒಂದು ವಿಷಯ ಸ್ಪಷ್ಟವಾಗಿ ಗಮನಿಸಬೇಕು : ಹಿಂದೂ ಧರ್ಮ ಇಂದಿನ

# ಗ್ರಾಮಸ್ಥರ ಶ್ರಮದಾನದಿಂದ ರಸ್ತೆ ದುರಸ್ತಿ

ಕೊಪ್ಪ: ಹಲವಾರು ವರ್ಷಗಳಿಂದ ದುರಸ್ತಿ ಕಾಣದೆ ಇದ್ದ ಕೊಪ್ಪ–ಕಳಸಾಪುರ–ತೆಂಗಿನಮನೆ (ಕೆ.ಕೆ.ಟಿ) ಲೋ|| ಇಲಾಖೆ ರಸ್ತೆಯ ದುರಸ್ತಿಗಾಗಿ ಮೊದಲ ಹಂತದ ಕೆಲಸವನ್ನು ಸೆ. 13ರಂದು ಗ್ರಾಮಸ್ಥರೇ ಆರಂಭಿಸಿದ್ದಾರೆ. ಪ್ರತಿ ಭಾನುವಾರ ಇದೇ ರೀತಿ ಶ್ರಮದಾನ ಮಾಡಿ ಈ ನಾದುರಸ್ತಾಗಿರುವ ರಸ್ತೆಯನ್ನು ಆದಷ್ಟು ದುರಸ್ತಿಗೊಳಿಸಲು ನಿರ್ಧರಿಸಿದ್ದಾರೆ.

ಆದರೆ ಕಾಕತಾಳೀಯವೋ, ಸ್ಥಳೀಯರ ಆದರ್ಶ ಪ್ರಯತ್ನಕ್ಕೆ ಸಿಕ್ಕ ಪ್ರತಿಫಲವೋ! ಅಂತೂ, ಕಳೆದ ಅಸೆಂಬ್ಲಿ ಚುನಾವಣೆಯ ವೇಳೆ ಎರಡು ಫರ್ಲಾಂಗ್ ದೂರ ರಸ್ತೆ ಬದಿ ರಾಶಿ ಹಾಕಲಾಗಿದ್ದ ಜಲ್ಲಿ ಮೋಕ್ಷ ಪಡೆದಿದೆ. ಸೆ. 18ರಿಂದ ಇಲಾಖೆಯೇ ಕೆಲಸ ಆರಂಭಿಸಿದೆ.

ಇದು ಎಲ್ಲಿಯವರೆಗೆ ಮುಂದುವರಿಯುವುದೋ—ಜನ ಆಸಕ್ತಿಯಿಂದ ಕಾಯುತ್ತಿದ್ದಾರೆ. (ವರದಿ: ಸುನಿಲ್ ಕುಲಾಸೊ.)

## ನಾಟಕ ಸ್ಪರ್ಧೆ ಫಲಿತಾಂಶ

ಬಿಳಾಲ್‌ಕೊಪ್ಪ: ಇಲ್ಲಿ ಜೇಸೀ ಸಪ್ತಾಹದ ಅಂಗವಾಗಿ ನಡೆದ ಜಿಲ್ಲಾ ಮಟ್ಟದ ನಾಟಕ ಸ್ಪರ್ಧೆಯಲ್ಲಿ, ಶೃಂಗೇರಿಯ ಕಲಾ ವಿನಿಮಯ ತಂಡ ಅಭಿನಯಿಸಿದ ಎಸ್. ಜಿ. ಶಿವಶಂಕರ್ ಅವರ 'ಸುಳಿಯಲ್ಲಿ ಸಿಕ್ಕವರು' ನಾಟಕ ಪ್ರಥಮ, ಬಾಳಗಡಿ ಸರ್ವೋದಯ ಯುವಕ ಸಂಘ ಅಭಿನಯಿಸಿದ ಇದೇ ಕರ್ತೃವಿನ 'ದಾರಿ ಯಾವುದಯ್ಯ ಮುಂದೆ' ದ್ವಿತೀಯ ಹಾಗೂ ಬಿಳಾಲ್‌ಕೊಪ್ಪ ಯು. ರೈತ ಸಂಘದವರ 'ತ್ಯಾಗಮಯಿ' ತೃತೀಯ ಬಹುಮಾನಗಳನ್ನು ಗಳಿಸಿವೆ.

## ಭಾರತೀಯ ಸನಾತನ ಧರ್ಮ

(3ನೇ ಪುಟದಿಂದ)

ಇಷ್ಟರ ಮಟ್ಟಿನ ಸುಧಾರಣೆಯತ್ತ ಬದಲಾವಣೆಗೊಳ್ಳುವ ಸಂಧಿಕಾಲದಲ್ಲಿ ಬಂದು ನಿಂತಿರಬೇಕಾದರೆ ನಮ್ಮ ಅನಿಷ್ಟ ಸಂಪ್ರದಾಯಗಳು, ಮೂಢ ನಂಬಿಕೆಗಳು, ಅಮಾನವೀಯ ಆಚರಣೆಗಳನ್ನು ಖಂಡಿಸಿ ಹೊಸ ಬದಲಾವಣೆಯ ನೂತನ ಮಾರ್ಗದೊಂದಿಗೆ ಹಳೆಯ ಸನಾತನ ತತ್ವಗಳನ್ನು ಎತ್ತಿ ತೋರಿದ ಎಷ್ಟೋ ಮಂದಿ ಸುಧಾರಣಾವಾದಿಗಳ ತ್ಯಾಗ, ಬಲಿದಾನಗಳು ಇದರ ಹಿಂದೆ ಇವೆ ಎಂಬುದನ್ನು ಅವರು ಜ್ಞಾಪಕದಲ್ಲಿಡಬೇಕು.

**ಶೃಂಗೇರಿಯಲ್ಲಿ ನಡೆಯಲಿರುವ 'ಅಂತರ್ಜಾತಿ ವಿವಾಹಿತರ ಸಮಾವೇಶ'ದ ಕಾರ್ಯಭಾರದ ಕಾರಣ ನಮ್ಮ 4–10–1987ರ ಸಂಚಿಕೆ ಪ್ರಕಟವಾಗುವುದಿಲ್ಲ. ಆದ್ದರಿಂದ ಮಕ್ಕಳ ವಿಭಾಗ 'ಚಿನಾರಿ ಕೂಟ'ವನ್ನು ಈ ಸಂಚಿಕೆಯಲ್ಲೇ ನೀಡಲಾಗಿದೆ. —ಸಂ.**



## ಅಂತರಜಾತಿ ವಿವಾಹಿತರ ಸಮಾವೇಶ

ಸರ್ಕಾರಿ ಕಿರಿಯ ಪ್ರಾಥಮಿಕ ಪಾಠಶಾಲೆ ಆವರಣ, ಶೃಂಗೇರಿ

**ಭಾನುವಾರ 4–10–1987 ಬೆಳಿಗ್ಗೆ 10 ಗಂಟೆಯಿಂದ**

### ಕಾರ್ಯಕ್ರಮಗಳು

ಅಧ್ಯಕ್ಷತೆ: **ಶ್ರೀ ವಡ್ಡರ್ಸೆ ರಘುರಾಮ ಶೆಟ್ಟಿ**, ಸಂಪಾದಕರು, 'ಮುಂಗಾರು'

ಉದ್ಘಾಟನೆ ಮತ್ತು ಪ್ರಾಸ್ತಾವಿಕ ಭಾಷಣ: **ಶ್ರೀ ಪೂರ್ಣಚಂದ್ರ ತೇಜಸ್ವಿ**

**ವಿಷಯ ಮಂಡನೆ:**

1. ಜಾತಿ ವ್ಯವಸ್ಥೆ ಮತ್ತು ಅಂತರ್ಜಾತಿ ವಿವಾಹ:
   —**ಶ್ರೀ ಕೆ. ರಾಮದಾಸ್**, ಮೈಸೂರು
2. ಅಂತರ್ಜಾತಿ ವಿವಾಹ: ವೈಜ್ಞಾನಿಕ ವಿವೇಚನೆ
   —**ಡಾ|| ಬಿಸಗರಹಳ್ಳಿ ರಾಮಣ್ಣ**, ಮಂಡ್ಯ
3. ಅಂತರ್ಜಾತಿ ವಿವಾಹ: ವ್ಯವಸ್ಥೆಯ ಹೊಣೆಗಾರಿಕೆ
   —**ಶ್ರೀಮತಿ ಸಾರಾ ಅಬೂಬಕ್ಕರ್**
4. ಅಂತರ್ಜಾತಿ ವಿವಾಹ: ಹೊಸ ಆಯಾಮಗಳು
   —**ಶ್ರೀ ಸುಚೇತನ ಸ್ವರೂಪ್**, 'ಪ್ರಜಾವಾಣಿ'

ಮಂಡಿಸಿದ ವಿಷಯಗಳ ಮೇಲೆ ಚರ್ಚೆ, ಪ್ರಶ್ನೋತ್ತರ, ಅನುಭವಗಳು, ವಿಚಾರ ವಿನಿಮಯ, ನಿರ್ಣಯಗಳ ಮಂಡನೆ, ಚರ್ಚೆ, ಅಂಗೀಕಾರ

ಆಸಕ್ತರೆಲ್ಲರಿಗೂ ಆದರದ ಸ್ವಾಗತ

**ಡಾ|| ಕೆ. ರಾಮಚಂದ್ರರಾವ್**, ಅಧ್ಯಕ್ಷರು,
**ಕಲ್ಕುಳಿ ವಿಠಲ ಹೆಗ್ಡೆ**, ಸಂಚಾಲಕರು,
ಮತ್ತು ಸದಸ್ಯರು, ಸ್ವಾಗತ ಸಮಿತಿ, ಶೃಂಗೇರಿ.

**ಸಂಚಾಲಕರು ಮತ್ತು ಸದಸ್ಯರು,**
ಜಿಲ್ಲಾ ವಿಚಾರವಾದಿ ವೇದಿಕೆ, ಚಿಕ್ಕಮಗಳೂರು.

ನಂ. ಆರ್‌ಸಿ. ಸಿಆರ್ 19/87–88 ತಹಸೀಲ್ದಾರ್‌ರವರ ಕಛೇರಿ
ಕೊಪ್ಪ ತಾಲ್ಲೂಕ್, 25.9 1987

## ಪ್ರಕಟಣೆ

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ, ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕ್, ತಮ್ಮಡವಳ್ಳಿ ಗ್ರಾಮದ ಮಗಳೆ ವಾಸಿ ಶ್ರೀ ವಿ. ಬಿ. ಧರ್ಮಯ್ಯ ಗೌಡ ಬಿನ್ ಬೊಮ್ಮಣ್ಣ ಗೌಡ ಇವರಿಗೆ ಕಾಫಿ ಸಿ ಆರ್ ಸಿ ಸಂಖ್ಯೆ 23/ 83.84 ರಂತೆ ತಮ್ಮಡವಳ್ಳಿ ಗ್ರಾಮದ ಸರ್ವೆ ನಂಬರ್ 168ರಲ್ಲಿ ಐದು ಎಕರೆ ಮೂವತ್ತು ಗುಂಟೆ ಪ್ರದೇಶಕ್ಕೆ ಕಾಫಿ ನೋಂದಣಿ ದೃಢೀಕರಣ ಪತ್ರ ನೀಡಿದ್ದು, ಸದರಿ ದೃಢೀಕರಣ ಪತ್ರವು ಕಾರಣಾಂತರದಿಂದ ಕಳೆದು ಹೋಗಿರುವುದರಿಂದ ಈ ದೃಢೀಕರಣ ಪತ್ರದ ನಕಲನ್ನು ಕೊಡುವಂತೆ ಕೋರಿರುತ್ತಾರೆ.

ಆದ್ದರಿಂದ ಮೇಲ್ಕಂಡ ಕಾಫಿ ನೋಂದಣಿ ದೃಢೀಕರಣ ಪತ್ರದ ನಕಲು ಕೊಡುವಲ್ಲಿ ಯಾರಿಂದಲಾದರೂ ತಕರಾರು ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಲಿಖಿತ ಮೂಲಕ ಈ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

(ಸಹಿ) **ತಹಸೀಲ್ದಾರ್**, ಕೊಪ್ಪ ತಾಲ್ಲೂಕು

## ಚಿರಸ್ಮರಣೆ

ನನ್ನ ಮಾತೃಶ್ರೀ **ಶ್ರೀಮತಿ ಪುಟ್ಟಮ್ಮ ಹೆಗ್ಗಡ್ತಿಯವರು, ನಿಡದಳ್ಳಿ,** ಇವರು ತಾ|| 21–9–1987ರ ಸೋಮವಾರ ಬೆಳಿಗ್ಗೆ 8.30ಕ್ಕೆ ಸ್ವರ್ಗಸ್ಥರಾದರೆಂದು ತಿಳಿಸಲು ವಿಷಾದಿಸುತ್ತೇನೆ. ತತ್ಸಂಬಂಧವಾದ **ವೈಕುಂಠ ಸಮಾರಾಧನೆಯನ್ನು 2–10–87ನೇ ಶುಕ್ರವಾರ** ಮಧ್ಯಾಹ್ನ 1 ಗಂಟೆಗೆ ನಿಡದಳ್ಳಿ ಸ್ವಗೃಹದಲ್ಲಿ ನಡೆಸಲಿರುವುದರಿಂದ ಕುಟುಂಬವರ್ಗದವರು ದಯಮಾಡಿಸಬೇಕಾಗಿ ಈ ಮೂಲಕ ಕೇಳಿಕೊಳ್ಳುತ್ತೇನೆ.

ಇಂತಿ,
**ಎಂ. ಟಿ. ಪುಟ್ಟಪ್ಪ ಗೌಡ,**
(ತುಳುವಿನಕೊಪ್ಪ ಮಂಡಲ ಪಂಚಾಯಿತ್ತಿ ಸದಸ್ಯ)
ನಿಡದಳ್ಳಿ, ಉತ್ತಮೇಶ್ವರ ಅಂಚೆ, ಕೊಪ್ಪ ತಾ||
ಫೋನ್: ನಾರ್ವೆ 33



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಿಕೆಗೆ ಅಚ್ಚುಕೂಟ, ಕೊಪ್ಪ